

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 05-03-2021 ಪ್ರಶ್ನೆ ಸಂಖ್ಯೆ : 116 (735)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 05-03-2021

ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕು ವ್ಯಾಪ್ತಿಯ ಹುಲಿಕೆರೆ ಗ್ರಾಮ ಪಂಚಾಯಿತಿಯ ಬಗ್ಗೆ

(ಅ) ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ವ್ಯಾಪ್ತಿಯ ಹುಲಿಕೆರೆ ಗ್ರಾಮ ಪಂಚಾಯಿತಿ ಯಾವ ವರ್ಷ ಹೊಸದಾಗಿ ರಚನೆಯಾಗಿದೆ ; (ವಿವರ ನೀಡುವುದು)

(ಆ) ಸದರಿ ಗ್ರಾಮ ಪಂಚಾಯಿತಿಗೆ ಯಾವ ಯಾವ ಗ್ರಾಮಗಳು ಸೇರ್ಪಡೆಯಾಗಿವೆ ; (ವಿವರ ನೀಡುವುದು)

(ಇ) ಹುಲಿಕೆರೆ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುವ ಗೌಡರಹಳ್ಳಿ ಮತ್ತು ಕಂಡಹಳ್ಳಿ ಗ್ರಾಮವು ನರೇಗಾ, ಮನೆಗಳ ಖಾತೆ, ಗ್ರಾಮದ ಮೂಲಭೂತ ಸೌಲಭ್ಯ ಒದಗಿಸಲು ಪಂಚಾಯಿತಿಯಲ್ಲಿ ಸದರಿ ಗ್ರಾಮಗಳಿಗೆ ಸಂಬಂಧಿಸಿದಂತೆ ಯಾವ ದಾಖಲೆಗಳು ಲಭ್ಯವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಹೊಸ ಪಂಚಾಯತಿ ರಚನೆಯಾಗಿ ಸುಮಾರು ವರ್ಷಗಳು ಕಳೆದರೂ ಈವರೆಗೆ ಗೌಡರಹಳ್ಳಿ ಮತ್ತು ಕಂಡಹಳ್ಳಿ ಗ್ರಾಮಗಳ ಜನತೆಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಈ ಬಗ್ಗೆ ಸದರಿ ಗ್ರಾಮದ ಜನತೆಗೆ ಯಾವ ಪರ್ಯಾಯ ವ್ಯವಸ್ಥೆ ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು)

(ಉ) ಈ ವಿಳಂಬಕ್ಕೆ ತೊಂದರೆಗೆ ಕಾರಣರಾದ ಅಧಿಕಾರಿಗಳ ವಿರುದ್ಧ ಈವರೆವಿಗೂ ಶಿಸ್ತುಕ್ರಮ ಕೈಗೊಳ್ಳದೆ ಇರಲು ಕಾರಣವೇನು ; ಕೈಗೊಂಡಿದ್ದಲ್ಲಿ, ಸಂಪೂರ್ಣ ವಿವರ ನೀಡುವುದು ?